



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 70

ಸಂಪುಟ: ೦೮ ಸಂಚಿಕೆ: ೩ | ಜುಲೈ ೨೦೨೧ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 08 Issue:3 | July 2021 | Pages - 8 | A. Sub. - Rs. 20/- | Editor : Sri. B.R. Ravindranath



೨೦.೦೪.೨೦೨೧

## ಕೊರಟಿ ಶ್ರೀನಿವಾಸರಾವ್, ಸಿ.ಕೆ.ನಾಗರಾಜರಾವ್,ಕೆ.ಪಿ.ರಾವ್ ದತ್ತಿ ನಿಧಿ ಉಪನ್ಯಾಸ

### ವಿಷಯ : ಶ್ರೀ ಬಿ.ಪುಟ್ಟಸ್ವಾಮಯ್ಯನವರು : ವ್ಯಕ್ತಿ ಮತ್ತು ಸಾಹಿತ್ಯ

### ಉಪನ್ಯಾಸಕರು: ಪ್ರೊ. ಹನೂರು ಕೃಷ್ಣಮೂರ್ತಿ

"ಶ್ರೀ ಬಿ.ಪುಟ್ಟಸ್ವಾಮಯ್ಯ: ವ್ಯಕ್ತಿ ಮತ್ತು ಸಾಹಿತ್ಯ " ಎಂಬ ವಿಷಯವನ್ನು ಕುರಿತು ಪ್ರೊ. ಹನೂರು ಕೃಷ್ಣ ಮೂರ್ತಿ ಯವರು ಸುದೀರ್ಘವಾದ ಉಪನ್ಯಾಸವನ್ನು ನಡೆಸಿಕೊಟ್ಟರು. ಬಿಎಂಶ್ರೀ ಪ್ರತಿಷ್ಠಾನ ಸ್ಥಾಪನೆಯಾದ ದಿನ ತಾವೂ ಭಾಗವಹಿಸಿದ್ದನ್ನು ಹಾಗೂ ಉದ್ಘಾಟನೆ ಮಾಡಿದ ಕುವೆಂಪು,ಡಾ.ಎಂ.ವೀ.ಸೀತಾರಾಮಯ್ಯ, ನಿಘಂಟು ತಜ್ಞ ವೆಂಕಟಸುಬ್ಬಯ್ಯ, ಬಿಎಂಶ್ರೀ ಮೊದಲಾದವರನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಂಡರು. ಬಿ.ಪುಟ್ಟಸ್ವಾಮಯ್ಯನವರ ತಾತ ತಂದೆಯವರು ರೇಷ್ಮೆ ವ್ಯಾಪಾರಿಗಳು ಮತ್ತು ಶ್ರೀಮಂತರು ಸಹ ಆಗಿದ್ದರು.ಬೆಂಗಳೂರಿನ ರಾಣಾಸಿಂಗ್ ಪೇಟೆಯಲ್ಲಿ ಅವರು ವಾಸವಾಗಿದ್ದರು. ಆದರೆ ಅವರ ತಂದೆಯ ಮರಣದ ಕಾರಣ ಅವರು ಶಾಲಾ ಶಿಕ್ಷಣ ಒಂಬತ್ತನೇ ತರಗತಿಗೆ ನಿಂತು ಹೋಯಿತು. ಆದರೆ ಅವರು ಜನತಾ ಶಿಕ್ಷಣ ಪಡೆದರು.

ಕನ್ನಡ, ಸಂಸ್ಕೃತ,ಇಂಗ್ಲೀಷ್ ಭಾಷೆಯಲ್ಲಿ ಅವರು ಪಾಂಡಿತ್ಯವನ್ನು ಹೊಂದಿದ್ದರು.ಅವರು ತಮ್ಮ ಬರವಣಿಗೆ ಪ್ರಾರಂಭಿಸಿದ್ದು ಪತ್ರಿಕೆಗಳಲ್ಲಿ. ಮೈಸೂರ್ ಸ್ಟಾರ್, ನ್ಯೂ ಮೈಸೂರು, ಒಕ್ಕಲಿಗ ಪತ್ರಿಕೆ ಮೊದಲಾದವುಗಳಲ್ಲಿ. ಪುಟ್ಟ ಸ್ವಾಮಯ್ಯನವರು ಆತ್ಮಕಥೆ ಬರೆದುಕೊಂಡಿಲ್ಲ ಕಾರಣ ಅದರ ಬಗ್ಗೆ ಅವರಿಗೆ ಆಸಕ್ತಿ ಇರಲಿಲ್ಲ ಎಂದು ಉಪನ್ಯಾಸಕಾರರು ವಿವರಿಸಿದರು.ಅವರ ನಾಟಕ, ಕಾದಂಬರಿಗಳ ಅಧ್ಯಯನ ಮಾಡಿದವರಿಗೆ ಅವರ ಪಾಂಡಿತ್ಯ ಎಂಥದು ಎಂಬುದು ಅರಿವಾಗುತ್ತದೆ ಎಂದು ಹೇಳಿದರು.

ಕುರುಕ್ಷೇತ್ರ ಅವರು ಬರೆದ ಮೊದಲ ನಾಟಕ ಇದು ಮೊದಲ ಮಹಾಯುದ್ಧದ ಅವಧಿ(೧೯೧೬-೧೯೪೬) ಭಾರತದಲ್ಲಿ ಬ್ರಿಟಿಷರು ಆಡಳಿತ ನಡೆಸುತ್ತಿದ್ದುದರಿಂದ ಅದರ ಪರಿಣಾಮ ಭಾರತದ ಮೇಲೂ ಆಗಿತ್ತು. ಈ ಕಾರಣದಿಂದ ಯುದ್ಧ ಮತ್ತು ಅದರ ದುಷ್ಪರಿಣಾಮವನ್ನು ಕೃಷ್ಣನ ಪಾತ್ರದ ಮೂಲಕ ಅವರ ಕುರುಕ್ಷೇತ್ರ ನಾಟಕ ಪ್ರತಿಪಾದಿಸುತ್ತದೆ. ಉದ್ಯೋಗ ಪರ್ವ ಆಧಾರಿತ ಕುರು- ಕ್ಷೇತ್ರ ನಾಟಕವನ್ನು ಬರೆದರು ಮತ್ತು ಗುಬ್ಬಿ ಕಂಪನಿಯು ಅದನ್ನು ಪ್ರದರ್ಶಿಸಿ ಭಾರೀ ಜನಪ್ರಿಯತೆಯನ್ನು ಪಡೆಯಿತು. ಆದರೆ ಅವರು ಬರೆದ ಯಾಜ್ಞಸೇನಿ ನಾಟಕ ರಂಗದ ಮೇಲೆ ಯಶಸ್ಸು ಕಾಣಲಿಲ್ಲ. ದ್ರೌಪದಿಯೇ ಮೊದಲಾದ ಸ್ತ್ರೀ ಪ್ರಧಾನ ಪಾತ್ರಗಳು ಇದ್ದುದರಿಂದ ಪುರುಷ ಪ್ರೇಕ್ಷಕರ ಹೆಚ್ಚಿನ ಸಂಖ್ಯೆಯ ಕಾರಣದಿಂದ ಅದು ವಿಫಲವಾಯಿತು ಎಂದು ಹನೂರು ಕೃಷ್ಣಮೂರ್ತಿಯವರು ವಿವರಿಸಿದರು.

ಗೌತಮ ಬುದ್ಧ, ಬಾಹುಬಲಿ, ಬಭ್ರುವಾಹನ ಮೊದಲಾದ ನಾಟಕಗಳ ಕಥೆ ಮತ್ತು ಹಿನ್ನೆಲೆಯನ್ನು ವಿವರಿಸಿದರು. ಬಾಹುಬಲಿ ನಾಟಕವು ಪಂಪ ಕವಿಯ ಆದಿಪುರಾಣವನ್ನು ಆಧರಿಸಿ ರಚನೆಯಾಗಿದೆ. ಕ್ರಾಂತಿಕಲ್ಯಾಣ ಕಾದಂಬರಿಯು ೧೨ನೇ ಶತಮಾನದ ಕರ್ನಾಟಕದ ಇತಿಹಾಸದ ವಿಸ್ತಾರವಾದ ಕ್ಯಾನ್ ವಾಸ್ ಮೇಲಿನ ವಸ್ತು ನಿಷ್ಠ ಕಥನವಾಗಿದೆ. ಇದು ಐದು ಭಾಗಗಳನ್ನು ಒಳಗೊಂಡಿದ್ದು ಕೊನೆಯ ಭಾಗ "ಕ್ರಾಂತಿ ಕಲ್ಯಾಣ" . ಇದು ೧೨ನೇ ಶತಮಾನದ ಶರಣ ಚಳುವಳಿಯನ್ನಾಧರಿಸಿರುವ ೪೨ ಅಧ್ಯಾಯಗಳ ಬೃಹತ್ ಕಾದಂಬರಿ. ಸುಮಾರು ೧೮-೨೦ ವರ್ಷಗಳ ಇತಿಹಾಸ ಹೊಂದಿರುವ ಶರಣ ಚಳುವಳಿಯ ಅರಿವು,ಕಾಯಕದ ಅನುಷ್ಠಾನವನ್ನು ಒಳಗೊಂಡಿದೆ. ಈ ಕಾದಂಬರಿಯ ಕಥೆ,ಪಾತ್ರಗಳು ಮತ್ತು ಉದ್ದೇಶವನ್ನು ಹನೂರು ಕೃಷ್ಣ ಮೂರ್ತಿಯವರು ವಿವರಿಸಿದರು.

ಡಾ.ಆರ್.ಲಕ್ಷ್ಮೀನಾರಾಯಣ ಅವರು ಅತಿಥಿಗಳನ್ನು ಸ್ವಾಗತಿಸಿ ಪರಿಚಯಿಸಿದರು. ಡಾ.ಬಿ.ಸಿ.ರಾಜಕುಮಾರ್ ವಂದನಾರ್ಪಣೆ ಸಲ್ಲಿಸಿದರು ಮತ್ತು ಕಾರ್ಯಕ್ರಮವನ್ನು ಆಯೋಜಿಸಿದರು.

**ಸಂಪಾದಕೀಯ**

ಕರೋನಾ ವೈರಾಣುವಿನಿಂದ ಬಿಡುಗಡೆಯೇ ಕಾಣದಿರುವುದು ಎಲ್ಲರಲ್ಲೂ ಹತಾಶೆ ಮೂಡಿಸುತ್ತಿದೆ. ಕರೋನಾ ದೆಸೆಯಿಂದ ನಾವು ೨೦೨೧ರ ಜೂನ್ ತಿಂಗಳ ಹೊಂಗನಸು ಪತ್ರಿಕೆಯನ್ನು ಪ್ರಕಟಿಸಲಾಗಲಿಲ್ಲ. ತಮ್ಮೆಲ್ಲರ ಕ್ಷಮೆ ಇರಲಿ.

ಈ ತಿಂಗಳ ಸಂಚಿಕೆಯಲ್ಲಿ ಶ್ರದ್ಧಾಂಜಲಿಗಳು ಹೆಚ್ಚಾಗಿರುವುದು ನಮ್ಮೆಲ್ಲರಿಗೂ ಖೇದ ತಂದಿದೆ. ಕನ್ನಡ ಸಾಹಿತ್ಯ ಹಾಗೂ ನಾಡು ನುಡಿಗೆ ಸೇವೆ ಸಲ್ಲಿಸಿದ ಹಲವಾರು ಗೌರವಾನ್ವಿತರು ಅಲ್ಪ ಸಮಯದಲ್ಲೇ ನಮ್ಮನ್ನು ಅಗಲಿದ್ದಾರೆ. ಅವರು ಬಿಟ್ಟು ಹೋಗಿರುವ ಆಸ್ತಿ ಸಾಕಷ್ಟಿದ್ದರೂ ಅವರ ಇರುವಿಕೆ ನಮಗೆ ಬೇಕಾಗಿತ್ತು. ಅವರೆಲ್ಲರಿಗೂ ನಮ್ಮ ಶ್ರದ್ಧಾಂಜಲಿ ಸಲ್ಲುತ್ತದೆ. ಕರೋನಾ ವೈರಾಣುವಿನ ಎರಡನೇ ಅಲೆಯಿಂದ ಉಂಟಾಗಿರುವ ಕಷ್ಟನಷ್ಟಗಳಿಂದ ಸುಧಾರಿಸಿಕೊಳ್ಳುವ ಮುನ್ನವೇ ಮೂರನೇ ಅಲೆಯ ಭೀತಿ ಪ್ರಾರಂಭವಾಗಿದೆ. ಕಳೆದ ವರ್ಷ ಮಾರ್ಚ್ ತಿಂಗಳಿನಿಂದ ನಾವು ಕರೋನಾದ ದಾಳಿಗೆ ಈಗಾಗಲೇ ತತ್ತರಿಸಿ ಹೋಗಿದ್ದೇವೆ. ಮೂರನೆಯ ಅಲೆಯಿಂದ ಇನ್ನೆಷ್ಟು ಕಷ್ಟದ ಪರಿಸ್ಥಿತಿಗಳನ್ನು ನಾವೆಲ್ಲರೂ ಎದುರಿಸಬೇಕೋ ಎಂಬ ಆತಂಕವಿದೆ.

ದೇಶಾದ್ಯಂತ ಲಾಕ್ ಡೌನ್ ಇದ್ದ ಕಾರಣದಿಂದ ಕೋಟ್ಯಾಂತರ ಜನರಿಗೆ ಉದ್ಯೋಗ ನಷ್ಟವಾಗಿ ಬಡತನದ ಬೇಗೆಯಲ್ಲಿದ್ದವರ ಜೀವನ ದುರ್ಭರವಾಗಿದೆ. ಇದರಿಂದ ಚೇತರಿಸಿಕೊಳ್ಳಲು ಅವರುಗಳಿಗೆ ಎಷ್ಟೋ ವರ್ಷಗಳು ಬೇಕಾಗಬಹುದು. ಬಹಳಷ್ಟು ದೇಶಗಳ ಆರ್ಥಿಕ ಪರಿಸ್ಥಿತಿಗಳು ಬಿಗಡಾಯಿಸಿವೆ.

ಒಂದು ಅಸಮಾನ ಸಮಾಜದಲ್ಲಿ ಯಾವುದೇ ಹೊಸ ಆವಿಷ್ಕಾರ ಅಥವಾ ತೊಂದರೆ ಕಾಣಿಸಿಕೊಂಡರೆ, ಅದರ ಪರಿಣಾಮವಾಗಿ ಶ್ರೀಮಂತ ಹಾಗೂ ಬಡ ಜನರ ನಡುವಿನ ಅಂತರ ಹೆಚ್ಚಾಗುವ ಸಾಧ್ಯತೆಗಳು ಹೆಚ್ಚು ಎಂಬುದನ್ನು ಇತಿಹಾಸ ತೋರಿಸಿದೆ. ಈಗಿನ ಪರಿಸ್ಥಿತಿಯಲ್ಲಿಯೂ ಇದು ನಿಜವಾಗಿದೆ, ಬಡತನದಲ್ಲಿದ್ದ ಜನ ಮತ್ತಷ್ಟು ಬಡವರಾಗಿದ್ದರೆ ಶ್ರೀಮಂತರು ಹೆಚ್ಚು ಶ್ರೀಮಂತರಾಗಿದ್ದಾರೆ ಎಂದು ವರದಿಗಳು ತಿಳಿಸುತ್ತಿವೆ. ಇದರಿಂದ ನಮ್ಮ ಸಮಾಜದಲ್ಲಿ ಹಲವಾರು ಇತರ ಸಮಸ್ಯೆಗಳು ಉದ್ಭವವಾಗುವ ಲಕ್ಷಣಗಳು ಕಾಣಿಸಿಕೊಳ್ಳುತ್ತಿವೆ.

ಮನುಕುಲ ಎದುರಿಸುತ್ತಿರುವ ಈ ಕಷ್ಟಕಾಲ ಆದಷ್ಟೂ ಬೇಗನೇ ಕೊನೆಗೊಳ್ಳಲಿ ಎಂಬುದೇ ನಮ್ಮ ಪ್ರಾರ್ಥನೆ.

– ಬಿ.ಆರ್. ರವೀಂದ್ರನಾಥ್

## ಪ್ರಕಟಣೆ
## 'ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿ' ಮತ್ತು 'ಡಾ. ವಿಜಯಾ ಸುಬ್ಬರಾಜ್ 'ಗಣ್ಯ ಲೇಖಕಿ' ಪ್ರಶಸ್ತಿ

ಬಿ.ಎಂ.ಶ್ರೀ. ಪ್ರತಿಷ್ಠಾನವು ಕೊಡಮಾಡುವ 'ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿ' ಗೆ ಡಾ. ನಾ. ದಾಮೋದರ ಶೆಟ್ಟಿ ಮತ್ತು ಡಾ. ಡಿ. ಮಂಗಳಾ ಪ್ರಿಯದರ್ಶಿನಿ ಅವರನ್ನೊಳಗೊಂಡ ಆಯ್ಕೆ ಸಮಿತಿಯು ೨೦೨೦ರಲ್ಲಿ ಪ್ರಕಟವಾದ ಶ್ರೀ ಚಿದಾನಂದ ಸಾಲಿ ಅವರ 'ಸಕಾರಣ' ಕೃತಿಯನ್ನು ಆಯ್ಕೆ ಮಾಡಿದೆ.

ಹಾಗೆಯೇ ೨೦೨೧ರ 'ಡಾ.ವಿಜಯಾ ಸುಬ್ಬರಾಜ್ 'ಗಣ್ಯಲೇಖಕಿ ಪ್ರಶಸ್ತಿ.' ಗೆ ಡಾ. ಕೋವೆಂ.ರಾಮಕೃಷ್ಣೇಗೌಡ ಮತ್ತು ಶ್ರೀಮತಿ ಶೈಲಜಾ ಸುರೇಶ್ ಅವರನ್ನೊಳಗೊಂಡ ಆಯ್ಕೆ ಸಮಿತಿಯು ಶ್ರೀಮತಿ ಪ್ರೇಮಾಭಟ್ ಅವರನ್ನು ಕಥಾ ಸಾಹಿತ್ಯ ಕ್ಷೇತ್ರದಲ್ಲಿನ ಅವರ ಕೊಡುಗೆಗಾಗಿ ಆಯ್ಕೆ ಮಾಡಿದೆ.

## ಪ್ರಕಟಣೆ
## ಹಳಗನ್ನಡ ಮತ್ತು ಶಾಸನ ತರಗತಿಗಳು

೨೦೨೧ರ ಜುಲೈ ೨೨ರಿಂದ ಹಳಗನ್ನಡ ಮತ್ತು ಶಾಸನ ತರಗತಿಗಳನ್ನು ಜಾಲಗೋಷ್ಠಿಯ ಮೂಲಕ ಪ್ರಾರಂಭಿಸಲಾಗುತ್ತದೆ. ಆಸಕ್ತರು ೧೫ ಜುಲೈ ೨೦೨೧ರ ವರೆಗೆ ದೂರವಾಣಿಯ ಮೂಲಕ ಅಥವಾ ಇ–ಮೇಲ್ ಕಳಿಹಿಸುವ ಮೂಲಕ ನೋಂದಾಯಿಸಿಕೊಳ್ಳಲು ಕೋರಲಾಗಿದೆ.
ಸಂಪರ್ಕಿಸಿ : ೦೮೦–೨೬೬೧೫೮೭೭ ಅಥವಾ
ಇ–ಮೇಲ್ bmsritrust@gmail.com

## ಪ್ರಕಟಣೆ
## ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ ಮತ್ತು ಶಾ. ಬಾಲುರಾವ್ ಅನುವಾದ ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ.ಎಂ.ಶ್ರೀ. ಪ್ರತಿಷ್ಠಾನವು ಪ್ರತಿವರ್ಷ ನೀಡುವ ಇಪ್ಪತ್ತೈದು ಸಾವಿರರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ.ಬಾಲೂರಾವ್ ಯುವಬರಹಗಾರ ಪ್ರಶಸ್ತಿಗಾಗಿ ೩೫ ವರ್ಷ ವಯಸ್ಸು ಮೀರದ ಯುವ ಬರಹಗಾರರು ರಚಿಸಿದ, ೨೦೨೦ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸಾಹಿತ್ಯದ ಯಾವುದೇ ಪ್ರಕಾರದ ಕೃತಿಗಳನ್ನು ಆಹ್ವಾನಿಸುತ್ತಿದೆ. ಹಾಗೆಯೇ –

ಬಿ.ಎಂ.ಶ್ರೀ. ಪ್ರತಿಷ್ಠಾನವು ಪ್ರತಿವರ್ಷ ನೀಡುವ ಇಪ್ಪತ್ತೈದು ಸಾವಿರರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ.ಬಾಲೂರಾವ್ ಅನುವಾದ ಪ್ರಶಸ್ತಿಗಾಗಿ ೨೦೨೦ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ, ಬೇರಾವುದೇ ಭಾಷೆಯಿಂದ ಕನ್ನಡಕ್ಕೆ ಅನುವಾದವಾಗಿರುವ ಕೃತಿಗಳನ್ನು ಆಹ್ವಾನಿಸುತ್ತಿದೆ.

ಆಸಕ್ತ ಲೇಖಕರು ಅಥವಾ ಅವರ ಪರವಾಗಿ ಪ್ರಕಾಶಕರು, ಮಿತ್ರರು, ಪ್ರಕಟಗೊಂಡ ಕೃತಿಯ ಮೂರು ಪ್ರತಿಗಳನ್ನು ಅವರ ವಿವರಗಳ ಜೊತೆ ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ. ಪ್ರತಿಷ್ಠಾನ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–೫೬೦೦೧೯, ಇವರಿಗೆ ಕಳುಹಿಸಬಹುದು.
ಕೊನೆಯ ದಿನಾಂಕ : ಜುಲೈ ೨೬ ೨೦೨೧
ಸಂಪರ್ಕಿಸಿ : ೦೮೦–೨೬೬೧೫೮೭೭

**ಕಿರು ಪರಿಚಯ**

## ಚಿದಾನಂದ ಸಾಲಿ



ರಾಯಚೂರಿನ ಚಿದಾನಂದ ಸಾಲಿ ಕಥೆ, ಕವಿತೆ, ಗಜಲ್, ನಾಟಕ, ಪ್ರಬಂಧ, ಸಂದರ್ಶನ, ಸಂಶೋಧನೆ, ವಿಮರ್ಶೆ, ಸಂಪಾದನೆ ಮತ್ತು ಅನುವಾದ ಪ್ರಕಾರಗಳಲ್ಲಿ ಈವರೆಗೆ ಇಪ್ಪತ್ತೈದು ಕೃತಿಗಳನ್ನು ಪ್ರಕಟಿಸಿದ್ದಾರೆ.

ತಮ್ಮ ಬರಹಗಳಿಗಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀವಿಜಯ ಪ್ರಶಸ್ತಿ, ಎರಡು ಸಲ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನ ಮತ್ತು ಅನುವಾದಕ್ಕಾಗಿ ಎರಡು ಸಲ ಕುವೆಂಪು ಭಾಷಾಭಾರತಿ ಪ್ರಾಧಿಕಾರದ ಬಹುಮಾನಗಳೂ ಸೇರಿದಂತೆ ಹಲವು ಪುರಸ್ಕಾರಗಳನ್ನು ಪಡೆದಿದ್ದಾರೆ.

ಕೇಂದ್ರ ಸಾಹಿತ್ಯ ಅಕಾದೆಮಿ. ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕುವೆಂಪು ಭಾಷಾಭಾರತಿ ಪ್ರಾಧಿಕಾರ ಹಾಗೂ ಕನ್ನಡ ವಿಶ್ವವಿದ್ಯಾಲಯಗಳಂಥ ಪ್ರತಿಷ್ಠಿತ ಪ್ರಕಾಶನ ಸಂಸ್ಥೆಗಳಿಂದಲೂ ಇವರ ಕೃತಿಗಳು ಪ್ರಕಟವಾಗಿದ್ದು ರಾಜ್ಯದ ನಾಲ್ಕು ವಿಶ್ವವಿದ್ಯಾಲಯಗಳಲ್ಲಿ ಇವರ ಬರಹಗಳು ಪಠ್ಯಕ್ಕಿವೆ.

ಬಿ.ಎಂ.ಶ್ರೀ ಪ್ರತಿಷ್ಠಾನದ ವತಿಯಿಂದ ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿ ಆ ಪ್ರಶಸ್ತಿ ಪಡೆಯುತ್ತಿರುವ ಶ್ರೀಚಿದಾನಂದ ಸಾಲಿ ಅವರಿಗೆ ಹಾರ್ದಿಕ ಅಭಿನಂದನೆಗಳು

# ಜುಲೈ ೨೦೨೧ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

ಜಾಲಗೋಷ್ಠಿ –ಕಾರ್ಯಕ್ರಮ

**ದಿನಾಂಕ : ೦೮ –೦೭–೨೦೨೧ ಗುರುವಾರ ಸಂಜೆ : ೪–೩೦ ಗಂಟೆಗೆ**

**ಶ್ರೀಮತಿ ಎಸ್.ಕೆ. ಪ್ರೇಮ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ದತ್ತಿ ಕಾರ್ಯಕ್ರಮ**

ಉದ್ಘಾಟನೆ ಮತ್ತು ಉಪನ್ಯಾಸ : ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ

ಖ್ಯಾತ ಸಾಹಿತಿಗಳು, ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರು

ವಿಷಯ : 'ಕನ್ನಡದ ವಚನ ಕಾರ್ತಿಯರು'– ಉಪನ್ಯಾಸ ಮಾಲಿಕೆ

**ದಿನಾಂಕ : ೧೫–೦೭–೨೦೨೧ ಗುರುವಾರ ಸಂಜೆ : ೪–೩೦ ಗಂಟೆಗೆ**

**ರಾಸ ಸಾಹಿತ್ಯ– ಡಿ.ಲಿಂಗಯ್ಯ–ಟಿ.ಎಸ್.ವೆಂಕಣ್ಣಯ್ಯ–ತೀ.ನಂ.ಶ್ರೀ–ಶಾರದಮ್ಮ ಹನುಮಯ್ಯ ದತ್ತಿ ಕಾರ್ಯಕ್ರಮ**



**ಉಪನ್ಯಾಸಕರು : ಡಾ. ಶಾಂತರಾಜು**

ಪ್ರಾಧ್ಯಾಪಕರು, ವಿಜಯ ಸಂಜೆ ಕಾಲೇಜು

ವಿಷಯ : ಜನಪದ ಸಾಹಿತ್ಯಕ್ಕೆ ಪ್ರೊ. ಡಿ.ಲಿಂಗಯ್ಯನವರ ಕೊಡುಗೆ



## ಕಿರು ಪರಿಚಯ

## ಪ್ರೇಮಾಭಟ್



ಜನನ: ೨೨.೦೯.೧೯೪೧ ಪ್ರಸಿದ್ಧ ಕಾದಂಬರಿಕಾರ್ತಿ, ಕತೆಗಾರ್ತಿ ಪ್ರೇಮಾಭಟ್‌ರವರು ಹುಟ್ಟಿದ್ದು ಉಡುಪಿ ಜಿಲ್ಲೆಯ, ಉಡುಪಿ ತಾಲ್ಲೂಕಿನ ಹೆರ್ಗ ಎಂಬಲ್ಲಿ ೧೯೪೧ ರ ಸೆಪ್ಟಂಬರ್ ೨೨ ರಂದು. ತಂದೆ ಜನಾರ್ದನ ಭಟ್, ತಾಯಿ ವನಜಾಕ್ಷಿ. ಕರ್ನಾಟಕ ಸರಕಾರದ ಸಚಿವಾಲಯದಲ್ಲಿ ಶಾಖಾಧಿಕಾರಿಯಾಗಿದ್ದು ನಿವೃತ್ತರಾದವರು. ನಾಡಿನ ಪ್ರಸಿದ್ಧ ಪತ್ರಿಕೆಗಳಿಗೆಲ್ಲಾ ಬರೆದ ಕಥೆಗಳು ಸುಮಾರು ೧೨ ಕಥಾ ಸಂಕಲನಗಳಲ್ಲಿ ಸೇರ್ಪಡೆಯಾಗಿದ್ದು ೧೦೮ ಕಥೆಗಳ 'ಅಕ್ಷತೆ', ಪಂಚಾಮೃತ, ಪ್ರೇಮಾಭಟ್ ೧೦೮ ಕಥೆಗಳು ಮತ್ತು ೨೦೦೭ ರಲ್ಲಿ ೩೬೫ ಕಥೆಗಳ ಬೃಹತ್ ಕಥಾ ಸಂಕಲನ 'ಕಥಾವರ್ಷ' ಪ್ರಕಟಗೊಂಡಿದ್ದು ಬಹುಶಃ ಭಾರತೀಯ ಭಾಷೆಗಳಲ್ಲೇ ಇದೊಂದು ದಾಖಲೆಯ ಕಥಾಸಂಕಲನವಾಗಿದೆ. ಹಲವಾರು ಕಥೆಗಳು ಟಿವಿ ಧಾರಾವಾಹಿಯಾಗಿಯೂ, ಎರಡು ಕತೆಗಳು ಇಂಗ್ಲಿಷ್ ಭಾಷೆಗೂ ಭಾಷಾಂತರವಾಗಿದೆ. ಒಲಿದು ಬಂದವನು' ಕಾದಂಬರಿಯು 'ಆಡಿಬಾ ಅರಗಿಣಿಯೇ' ಎಂಬ ಹೆಸರಿನಿಂದ ಮತ್ತು 'ಸುಜಾತ' ಕಾದಂಬರಿಯು 'ಬೆಕ್ಕಿನ ಕಣ್ಣು' ಹೆಸರಿನಿಂದ ಚಲನಚಿತ್ರವಾಗಿಯೂ ಜನಮನ ಸೆಳೆದಿವೆ. ನಂದಿನಿ ಕಾದಂಬರಿಯು ಇಂಗ್ಲಿಷ್ ಭಾಷೆಗೂ, ಆಯ್ದಕ್ಕಿ ಮಾರಯ್ಯ, ಕೊಟ್ಟೂರು ಬಸವೇಶ್ವರ, ಹೆಳವನ ಕಟ್ಟೆ ಗಿರಿಯಮ್ಮ ಕೃತಿಗಳು ಇತರ ಭಾಷೆಗಳಿಗೂ ಅನುವಾಗೊಂಡಿವೆ. ಪತ್ರಿಕೆಗಳು ಏರ್ಪಡಿಸುವ ಕಥಾಸ್ಪರ್ಧೆಗಳಲ್ಲಿ ಹಲವಾರು ಬಾರಿ ಬಹುಮಾನಿತರಾಗಿರುವರಲ್ಲದೆ 'ಮಿಣುಕು ಹುಳು' ಕಾದಂಬರಿಗೆ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಮಾತೋಶ್ರೀ ರತ್ನಮ್ಮ ಹೆಗಡೆ ಪ್ರಶಸ್ತಿ, 'ಗೊಂದಲ' ಕಾದಂಬರಿಗೆ ಅಂತಾರಾಷ್ಟ್ರೀಯ ಮಹಿಳಾ ವರ್ಷದ ಪ್ರಶಸ್ತಿ (ಕ.ಸಾ.ಪ;), 'ಕಾಡುಕಡಿದು ಊರು ಮಾಡಿದರು' ಕಾದಂಬರಿಗೆ ಸರ್. ಎಂ. ವಿಶ್ವೇಶ್ವರಯ್ಯ ಪ್ರತಿಷ್ಠಾನ ಪ್ರಶಸ್ತಿ, 'ಗಾದಿ' ಕಾದಂಬರಿಗೆ ರಾಮಕ್ಕ ಪದ್ಮಕ್ಕ ಟ್ರಸ್ಟ್ ಪ್ರಶಸ್ತಿ, 'ಪ್ರೇಮಾಭಟ್ ೧೦೮ ಕಥೆಗಳು' ಕಥಾ ಸಂಕಲನಕ್ಕೆ ಕರ್ನಾಟಕ ಲೇಖಕಿಯರ ಸಂಘದ ಅನುಪಮಾ ಪ್ರಶಸ್ತಿ, ಭೂಮಿಕಾ ಕೃತಿಗೆ ಅಳಸಿಂಗ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, ಕಿತ್ತೂರ ರಾಣಿ ಚೆನ್ನಮ್ಮ ಪ್ರಶಸ್ತಿಗಳಲ್ಲದೆ ಹಲವಾರು ಸಂಘ ಸಂಸ್ಥೆಗಳಿಂದ ಸನ್ಮಾನಿತರು. ಸ್ನೇಹಿತರು, ಅಭಿಮಾನಿಗಳು ೭೦ರ ಸಂಭ್ರಮದಲ್ಲಿ ಅರ್ಪಿಸಿದ ಅಭಿನಂದನ ಗ್ರಂಥ 'ಸಂಸ್ಕೃತಿ' (೨೦೧೧). ಬಿ.ಎಂ.ಶ್ರೀ ಪ್ರತಿಷ್ಠಾನದ ವತಿಯಿಂದ ಇದೀಗ ಡಾ. ವಿಜಯಾ ಸುಬ್ಬರಾಜ್ **'ಗಣ್ಯಲೇಖಕಿ'** ಪ್ರಶಸ್ತಿ ಪಡೆಯುತ್ತಿರುವ ಶ್ರೀಮತಿ ಪ್ರೇಮ ಭಟ್ ಅವರಿಗೆ ಹಾರ್ದಿಕ ಅಭಿನಂದನೆಗಳು

**ಪದಚರಿತೆ**

**೮ನೇ ಪುಟದಿಂದ**

'ಮಂತ್ರಪೂತ' ("ಮಂತ್ರಪೂತಾಂಗಮಂ ನೃಪನೆಯ್ದಿದಂ ಉದ್ಯಚ್ಛೃಂಗಂ ಆ ಶತಶೃಂಗಮಂ" 'ಪಂಪಭಾರತ'). ಮಂತ್ರಶಕ್ತಿಯನ್ನು ಕೈವಶಮಾಡಿಕೊಂಡವನು 'ಮಂತ್ರಸಿದ್ಧ' (ಮಹನೀಯಂ ಮಂತ್ರಸಿದ್ಧಂ ಬಿಡೆ ಪಿಡಿದ ಮಹಾಮುದ್ರೆಯಂ" – ಪಾರ್ಶ್ವನಾಥಪುರಾಣ'). "ಆತ್ಮನೆಂಬ ಹುತ್ತಿನೊಳಗೆ ನಿದ್ರೆಯೆಂಬ ಕಾಳೋರಗಟ್ಟಿ ಕಚ್ಚಿ .. .. ಮಂತ್ರಸಿದ್ಧರ ಮಂತ್ರ ಮರೆದು ಹೋದವು" ಎಂದು ಅಲ್ಲಮಪ್ರಭು ಒಂದೆಡೆ ಗೇಲಿಮಾಡುತ್ತಾನೆ.

ವೀರಶೈವರ 'ಅಷ್ಟಾವರಣ'ಗಳಲ್ಲಿ [ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ ಮತ್ತು 'ಮಂತ್ರ'] ಇದೂ ಒಂದು. 'ಮನ್' (ಆಲೋಚಿಸು) ಮತ್ತು 'ತ್ರ' (ಕಾಪಾಡು' ಎಂದರೆ ಇದನ್ನು ಉಸುರುವವರನ್ನು ಕಾಪಾಡುವಂಥದು – "ಮನನಾತ್ ತ್ರಾಯತೇ ಇತಿ ಮಂತ್ರಃ" – ಎಂಬರ್ಥವನ್ನು ಹೇಳಲಾಗುತ್ತದೆ. ಇದು ಶಿವಮಂತ್ರ; "ಶಿವಮಂತ್ರಕ್ಕೆ ಸರಿ ಬೇಱೆ ಮಂತ್ರವಿಲ್ಲ" ಎಂಬುದು ಬಸವಣ್ಣನ ಮಾತು. ಶಿವಮಂತ್ರಕ್ಕೆ ಎರಡು ರೂಪ. 'ನಮಃಶಿವಾಯ' ಎಂಬುದು ಪಂಚಾಕ್ಷರ ಮಂತ್ರ; ಅದಕ್ಕೆ ಮೊದಲು 'ಓಂ' ಸೇರಿದರೆ ಷಡಕ್ಷರಮಂತ್ರ. "ಮಂತ್ರವೆ ಅವಯವಂಗಳಾಗುಳ್ಳ ಶಿವ" ಎಂದು ಚೆನ್ನಬಸವಣ್ಣ ವರ್ಣಿಸುತ್ತಾನೆ. "ಮಂತ್ರವ ತನ್ನಲ್ಲಿ ಸಯವ ಮಾಡಲರಿಯದ ಮಂತ್ರಭ್ರಷ್ಟರ ನೋಡಾ" ಎಂದು ಚೆನ್ನಬಸವಣ್ಣ ತನ್ನೊಂದು ವಚನದಲ್ಲಿ ಹೇಳುತ್ತಾನೆ. ಮಂತ್ರಗಳ ಗುಟ್ಟನ್ನು ವಿವರಿಸುವುದೇ 'ಮಂತ್ರಗೋಪ್ಯ'.

======

೧೨-೦೫-೨೦೨೧ **ಕ.ವೆಂ. ರಾಘವಾಚಾರ್-ಡಿ.ವಿ.ಗುಂಡಪ್ಪ-ಬಿ.ಎಸ್. ಸಣ್ಣಯ್ಯ- ಡಾ.ಎಂ.ಎಲ್. ಲಲಿತಮ್ಮ ದತ್ತಿ ಕಾರ್ಯಕ್ರಮ**

**'ಮರೆಯಬಾರದ ಸಾಹಿತಿ ಶ್ರೇಷ್ಠರು' ಮಾಲಿಕೆ**

**ಉಪನ್ಯಾಸಕರು : ಡಾ. ಸಿ.ಪಿ.ನಾಗರಾಜ್, ನಿವೃತ್ತ ಪ್ರಾಧ್ಯಾಪಕರು, ನಿವೃತ್ತ ಪ್ರಾಧ್ಯಾಪಕರು**

**ವಿಷಯ : ಶ್ರೀಕಂಠೇಶಗೌಡರು : ವ್ಯಕ್ತಿ ಮತ್ತು ಸಾಹಿತ್ಯ**

ಡಾ.ಸಿ.ಪಿ.ನಾಗರಾಜ್ ರವರು ಮೇಲಿನ ವಿಷಯವನ್ನು ಕುರಿತು ಉಪನ್ಯಾಸವನ್ನು ನಡೆಸಿಕೊಟ್ಟರು. ಶ್ರೀ ಎಂ.ಎಲ್.ಶ್ರೀಕಂಠೇಗೌಡರ ಸಮಗ್ರ ಸಾಹಿತ್ಯವನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾಗಿದ್ದ ಹ.ಕ.ರಾಜೇಗೌಡರು ಸಂಪಾದಿಸಿ ಉಳಿಸಿ ಕೊಟ್ಟಿದ್ದಾರೆ ಎಂದು ಹೇಳಿದರು.ಸುಬೇದಾರ್ ಲಿಂಗೇಗೌಡರ ಮಗ ಎಂ.ಎಲ್.ಶ್ರೀಕಂಠೇಗೌಡರು.ಬಿ.ಎ.ಬಿ.ಎಲ್.,ಪದವೀಧರರು ಮತ್ತು ಇಂಗ್ಲೀಷ್ ಸಾಹಿತ್ಯದ ಬಗ್ಗೆ ಅಪಾರ ಒಲವುಳ್ಳವರಾಗಿದ್ದರು. ವೃತ್ತಿಯಲ್ಲಿ ವಕೀಲರು ನಂತರ ನ್ಯಾಯಾಧೀಶರಾಗಿ ಬೆಂಗಳೂರು, ಮೈಸೂರು ಮೊದಲಾದ ಕಡೆಗಳಲ್ಲಿ ಅವರು ಕಾರ್ಯ ನಿರ್ವಹಿಸಿದರು. ಕನ್ನಡ, ಸಂಸ್ಕೃತ,ಇಂಗ್ಲೀಷ್ ಭಾಷೆಯ ಪಾಂಡಿತ್ಯವನ್ನು ಹೊಂದಿದ್ದ ಎಂ.ಎಲ್.ಶ್ರೀಕಂಠೇಗೌಡರು ವೃತ್ತಿಯ ಜೊತೆಗೆ ಪ್ರವೃತ್ತಿಯಾಗಿ ಪುಸ್ತಕ ಪ್ರಕಾಶನ, ಪತ್ರಿಕೆ ನಡೆಸುತ್ತಾರೆ. ನಾಟಕ ಸಭಾದಲ್ಲಿ ಅಭಿನಯಿಸಲು ಅವರು ನಾಟಕಗಳನ್ನು ಬರೆದರು, ರೂಪಾಂತರ ಮತ್ತು ಅನುವಾದಗಳನ್ನು ಮಾಡಿದರು. ಅವರ 'ಪ್ರತಾಪ ರುದ್ರದೇವ' ಪೆಕ್ಸ್ ಪಿಯರ್‌ನ ಮ್ಯಾಕ್ ಬೆತ್ ನಾಟಕದ ನೇರ ಅನುವಾದ. 'ಪ್ರಮಿಳಾರ್ಜುನೀಯ' ಷೇಕ್ಸ್ ಪಿಯರ್ ನ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್' ನಾಟಕದ ರೂಪಾಂತರ. 'ಸೀತಾ ಸ್ವಯಂವರ' ಅವರ ಸ್ವಂತ ನಾಟಕ. ಚಿಕ್ಕ ಬಣಜಿಗರು', 'ಕನ್ಯಾವಿತಂತು', 'ಭವಾನಿಯ ಬಾಳು' ಮೊದಲಾದ ಕಾದಂಬರಿಗಳನ್ನು ಬರೆದರು. ಇವುಗಳೊಂದಿಗೆ ಪೌರಾಣಿಕ, ಚಾರಿತ್ರಿಕ ಕೃತಿಗಳನ್ನು, ೦೮ ಜಾನಪದ ಕಥೆಗಳನ್ನು ಬರೆದಿದ್ದಾರೆ. ಎಂ.ಎಲ್.ಶ್ರೀಕಂಠೇಗೌಡರು ಒಟ್ಟು ೨೩ ಕೃತಿಗಳನ್ನು ರಚಿಸಿದ್ದಾರೆ. ಡಿವಿಜಿ,ಮಾಸ್ತಿ ಮೊದಲಾದವರು ಅವರ ಸಾಹಿತ್ಯ ಸಾಮರ್ಥ್ಯದ ಪರಿಚಯವನ್ನು ಮಾಡಿಕೊಟ್ಟಿದ್ದಾರೆ ಎಂದು ಡಾ.ಸಿ.ಪಿ.ನಾಗರಾಜ್ ಅವರು ತಮ್ಮ ಉಪನ್ಯಾಸದಲ್ಲಿ ವಿವರಿಸಿದರು. ಡಾ.ಆರ್. ಲಕ್ಷೀನಾರಾಯಣ ಎಂ.ಎಲ್.ಶ್ರೀಕಂಠೇಗೌಡರು ಮತ್ತು ಅತಿಥಿಗಳ ಪರಿಚಯ ಮಾಡಿಕೊಟ್ಟರು. ಡಾ.ಬಿ.ಸಿ.ರಾಜಕುಮಾರ್ ಅವರು ಕಾರ್ಯಕ್ರಮ ನಿರ್ವಹಣೆಯೊಂದಿಗೆ ವಂದನಾರ್ಪಣೆ ಮಾಡಿದರು.

೧೯-೦೫-೨೦೨೧

## ವೈಯಾಕರಣಿ ಗರಣಿ ಕೃಷ್ಣಚಾರ್ಯ ದತ್ತಿ ಕಾರ್ಯಕ್ರಮ

**ಉಪನ್ಯಾಸಕರು : ಡಾ. ಬಿ. ರಾಜಶೇಖರಪ್ಪ**

ಖ್ಯಾತ ಸಂಶೋಧಕರು, ನಿವೃತ್ತ ಪ್ರಾಧ್ಯಾಪಕರು

**ವಿಷಯ : 'ನನ್ನಿಯೊಳಿನತನಯಂ' ಎಂಬ ಪಂಪನ ಮಾತಿನ 'ನನ್ನಿ' ಎಂದರೆ ಏನು?**



ಡಾ.ಬಿ.ರಾಜಶೇಖರಪ್ಪನವರು ಪಂಪ ಕವಿಯ ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಕರ್ಣನನ್ನು ಕುರಿತು ಬಳಸಿರುವ 'ನನ್ನಿಯೊಳಿತನಯಂ ಎಂಬ ಪದ್ಯಭಾಗದಲ್ಲಿನ "ನನ್ನಿ" ಶಬ್ದವನ್ನು ಕುರಿತು ವಿಷಯ ಮಂಡನೆ ಮಾಡಿದರು. ಪಂಪನು ತನ್ನ ಕಾವ್ಯದಲ್ಲಿ ಎರಡು ಪದ್ಯ ಖಂಡಗಳಲ್ಲಿ ಬಳಸಿರುವ "ನನಿ"ೃ ಶಬ್ದದ ಹಿನ್ನಲೆಯನ್ನು ಕವಿಗಳು ಮತ್ತು ಭಾಷಾ ಪಂಡಿತರ ಅಭಿಪ್ರಾಯವನ್ನು ಉಲ್ಲೇಖಿಸಿ ವಿವರಿಸಿದ್ದಾರೆ.

ಪಂಪ ಕವಿಯು ನನ್ನಿಯನ್ನು ಸತ್ಯ ಎಂದು ಬಳಸಿದ್ದಾನೆಯೇ ಇಲ್ಲ ಇದಕ್ಕೆ ಬೇರೆ ಅರ್ಥವೇನಾದರೂ ಉಂಟೆ ಎಂಬ ವಿಚಾರದ ಬಗ್ಗೆ ಚರ್ಚೆ ಮಾಡುತ್ತಾ ಕನ್ನಡ ಸಾಹಿತ್ಯ ಚರಿತ್ರೆಯ ಅಭ್ಯಾಸಿಗಳಿಗೆ 'ನನ್ನಿ' ಶಬ್ದ ಚಿರಪರಿಚಿತವಾಗಿದೆ ಎಂದು ತಿಳಿಸಿದರು. ಬಿರುದುಗಳು ಮತ್ತು ಹೆಸರುಗಳಲ್ಲಿ ನನ್ನಿಯ ಗಂಗ, ನನ್ನಿಯ ಶಾಂತಳ, ನನ್ನಿಯ ನೊಳಂಬ, ನನ್ನಿಯ ಚೆಂಗಾಳ್ವ,ನನ್ನಿಯ ಮೇರು,ನನ್ನಿಗಾಶ್ರಯ ಎಂಬ ಬಿರುದುಗಳು ಮತ್ತು ನನ್ನಿಗ, ನನ್ನಿ ಗಾವುಂಡ, ನನ್ನಿ ಗೌಡಿ, ನನ್ನಿ ನಾಯಕ, ನನ್ನಿ ಸೆಟ್ಟಿ, ನನ್ನಿ ವಠಾರ, ನನ್ನಿ ಮುನೀಂದ್ರ ಎಂಬ ಹೆಸರುಗಳು ಬಳಕೆಯಲ್ಲಿವೆ ಎಂದು ಪ್ರಬಂಧ ಮಂಡಕರು ಹೇಳಿದರು. "ನೆನೆಯದಿರಣ್ಣ ಭಾರತದೊಳಿಂ ಪೆರರಾರುಮನ್ ಒಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ.".ಪದ್ಯವನ್ನು ಉಲ್ಲೇಖಿಸಿ ಇದು ಕರ್ಣನ ಸಮಾಧಿಯ ಮೇಲೆ ಬರೆಸುವ ಚರಮವಾಕ್ಯದಲ್ಲಿನ ಪ್ರಶಸ್ತಿಯಂತಿದೆ ಎಂದು ಅಭಿಪ್ರಾಯಪಟ್ಟರು. ಎಪಿಗ್ರಾಫಿಕಾ ಕರ್ನಾಟಕದ ಶಾಸನದಲ್ಲಿ 'ಸತ್ಯದೊಳ್ ಇನತನಯಂ' ಎಂದು ಶಾಸನ ಕವಿ ಬಳಸಿರುವ ಉದಾಹರಣೆ ನೀಡಿದ್ದಾರೆ. ಹಾಗೆಯೇ ಸರ್ವಜ್ಞನು ತನ್ನ ತ್ರಿಪದಿಯೊಂದರಲ್ಲಿ "ಅನ್ನವನು ಇಕ್ಕುವುದು ನನ್ನಿಯನು ನುಡಿಯುವುದು........ಸರ್ವಜ್ಞ" ಎಂದು ಬಳಸಿರುವ ನನ್ನಿ ಶಬ್ದದಲ್ಲಿಯೂ ಸತ್ಯ ಎಂಬ ಅರ್ಥವಿದೆ ಎಂದಿದ್ದಾರೆ. ಪಂಡಿತ ಪ್ರಭಣ್ಣನವರ ಕನ್ನಡ ಕನ್ನಡ ನಿಘಂಟುವಿನಲ್ಲಿಯೂ ನನ್ನಿ ಶಬ್ದಕ್ಕೆ ಸತ್ಯ ಎನ್ನುವ ಅರ್ಥವಿದೆ ಎನ್ನುವುದನ್ನು ಉದಾಹರಿಸಿದರು. 'ಪಂಪ ಭಾರತ ದೀಪಿಕೆ'ಯಲ್ಲಿ ಡಿ.ಎಲ್.ನರಸಿಂಹಾಚಾರ್ಯರು ಸತ್ಯದಲ್ಲಿ ಕರ್ಣ ಎಂದು ಬಳಸಿರುವುದನ್ನೂ ಹಾಗೆಯೇ ಕನ್ನಡದ ಗಾದೆಯೊಂದರಲ್ಲಿ "ತ್ಯಾಗಕ್ಕೆ ಕರ್ಣ, ಭೋಗಕ್ಕೆ ಇಂದ್ರ, ಸತ್ಯಕ್ಕೆ ಹರಿಶ್ಚಂದ್ರ ಎಂದು ಬಳಸಿರುವುದರಲ್ಲಿ ಯಾರದೇ ತಕರಾರಿಲ್ಲ ಆದರೆ ಕರ್ಣ ಸತ್ಯಸಂಧನೇನಲ್ಲ. ಯುಧಿಷ್ಠಿರನಿಗೆ 'ಸತ್ಯ' ಒಪ್ಪುತ್ತದೆ. ಶಬ್ದಕೋಶವು ನನ್ನಿ ಶಬ್ದಕ್ಕೆ ನಿಜ, ವಿಶ್ವಾಸ, ಸತ್ಯ, ನಿಶ್ಚಯ ಎಂಬ ಅರ್ಥಗಳಿರುವುದನ್ನು ಉಲ್ಲೇಖಿಸಿದರು. ಶಿವಕೋಟ್ಯಾಚಾರ್ಯನ ವಡ್ಡಾರಾಧನೆಯಲ್ಲಿ ಸುಕುಮಾರಸ್ವಾಮಿಯ ಕಥೆಯಲ್ಲಿ 'ನನ್ನಿಗೊಟ್ಟು' ಶಬ್ದವನ್ನು ಸುದಾಮೆಯು ಬಳಕೆ ಮಾಡುತ್ತಾಳೆ. ನನ್ನಿಗೊಟ್ಟು ಎಂದರೆ ಮಾತು ಕೊಡುವುದು, ಪ್ರಮಾಣ ಮಾಡುವುದು, ಭಾಷೆ ಕೊಡುವುದು ಎಂದರ್ಥ.

ದ್ರಾವಿಡ ಭಾಷೆಗಳಲ್ಲಿ ತನ್ನ ಮೂಲ ಸತ್ವ ಉಳಿಸಿಕೊಂಡಿರುವ ತಮಿಳು ಭಾಷೆಯಲ್ಲಿ ' ನನ್ರಿ' ಎಂಬ ಶಬ್ದದ ಬಳಕೆ ಇದೆ. ಕನ್ನಡದ ನನ್ನಿ ಶಬ್ದಕ್ಕೆ ಪರ್ಯಾಯವಾಗಿ 'ನನ್ರಿ' ಪದವನ್ನು ತಮಿಳಿನಲ್ಲಿ ಬಳಸುತ್ತಾರೆ. 'ನನ್ರಿ' ತಮಿಳು ಶಬ್ದಕ್ಕೆ ಉಪಕಾರ,ಒಳ್ಳೆಯತನ,ಸದ್ಗುಣ,ಧರ್ಮ, ಉಪಕಾರ ಸ್ಮರಣೆ ಎಂಬ ಅರ್ಥಗಳಿವೆ. ಉಪಕಾರ ಸ್ಮರಣೆ ಎಂಬ ತಮಿಳು ಶಬ್ದದ ಅರ್ಥವು ಕರ್ಣನಿಗೆ ಅನ್ವಯಿಸುತ್ತದೆ ಎಂದು ಹೇಳಿ ಅದಕ್ಕೆ ಪಂಪಭಾರತದ ವಿಫಲ ಸಂಧಾನದ ಬಳಿಕ ಕೃಷ್ಣ ಕರ್ಣರ ಭೇಟಿ ಮತ್ತು ಜನ್ಮರಹಸ್ಯ ತಿಳಿಸುವ ಸಂದರ್ಭ, ಗಂಗಾನದಿಯ ತೀರದಲ್ಲಿ ಕರ್ಣ ಕುಂತಿಯರ ಭೇಟಿ, ಸತ್ಯಂತಪ ಮುನಿಗಳ ಆಶ್ರಮದಲ್ಲಿನ ಕರ್ಣೋಪಚಾರದ ಪ್ರಸಂಗ ಹಾಗೂ ಕರ್ಣ ಭಾನುಮತಿಯರ ದ್ಯೂತದ ಪ್ರಸಂಗದಲ್ಲಿ ಭಾನುಮತಿಯ ಕೊರಳ ಮುತ್ತಿನ ಹಾರ ಹರಿದು ಬಿದ್ದಾಗಿನ ದುರ್ಯೋಧನನ ಪ್ರತಿಕ್ರಿಯೆ ಮೂಲಕ ಕರ್ಣ ದುರ್ಯೋಧನರ ಸಂಬಂಧದ ಮೇಲೆ ಬೆಳಕು ಚೆಲ್ಲುವ ಪ್ರಸಂಗಗಳನ್ನು ಉದಾಹರಿಸಿದರು. ಒಟ್ಟಾರೆ ಪಂಪ ಕವಿಯ ನನ್ನಿ ಎಂಬ ಶಬ್ದವು ತಮಿಳಿನ 'ನನ್ರಿ'ಯ ಉಪಕಾರ ಸ್ಮರಣೆ ಮತ್ತು ಕರ್ಣ ಕುಂತಿಯ ಭೇಟಿಯಲ್ಲಿ ಕರ್ಣ ತಾನು ತಾಯಿಗೆ ಕೊಟ್ಟ ಭಾಷೆಯನ್ನು ಉಳಿಸಿಕೊಂಡದ್ದು ಎಂಬ ಅರ್ಥವು ಪಂಪ ಬಳಸುವ ಕರ್ಣನ ನನ್ನಿಗೆ ಪೂರಕ ಅರ್ಥವನ್ನು ಹೊಂದಿವೆ. ತಮಿಳಿನ ಪರ್ಯಾಯ ಪದ 'ನನ್ರಿ' ಎಂದರೆ ಉಪಕಾರ ಸ್ಮರಣೆ, ಕೊಟ್ಟ ಭಾಷೆ ಉಳಿಸಿಕೊಳ್ಳುವುದು ಎಂಬ ಅರ್ಥದಲ್ಲಿ ಪಂಪ ನನ್ನಿ ಶಬ್ದವನ್ನು ಬಳಸಿದ್ದಾನೆ ಎಂಬ ತೀರ್ಮಾನಕ್ಕೆ ಪ್ರಬಂಧ ಮಂಡಕರು ಬಂದರು.

# ಶ್ರದ್ಧಾಂಜಲಿ



## ಬಿ ಎಸ್ ಸಣ್ಣಯ್ಯ
### ೧೯೨೮-೧೨-೦೫-೨೦೨೧

ಬಿ.ಎಸ್. ಸಣ್ಣಯ್ಯ ಅವರು ರೈತಕುಟುಂಬದಲ್ಲಿ ೧೯೨೮ರಲ್ಲಿ ಜನಿಸಿದರು. ಇವರು ೧೯೫೫ರಲ್ಲಿ ಕನ್ನಡ ಎಂ.ಎ. ಪದವಿಯನ್ನೂ ಅನತರ ಬಿ.ಲಿಬ್. ಎಸ್ಸಿ ಮತ್ತು ನವದೆಹಲಿಯ ರಾಷ್ಟ್ರೀಯ ಪತ್ರಾಗಾರದಿಂದ ಡಿಪ್.ಇನ್, ಆರ್ಕೈವ್ ಅನ್ನೂ ಪಡೆದರು. ೧೯೫೬ರಲ್ಲಿ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ಪದವೀಧರ ಸಂಶೋಧಕರಾಗಿ ಸೇರಿ ಅಲ್ಲಿಯ ಸಹಾಯಕ ನಿರ್ದೇಶಕರಾದರು. ೧೯೬೮ರಿಂದ ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸಹಾಯಕ ನಿರ್ದೇಶಕರು ಮತ್ತು ಉಪನಿರ್ದೇಶಕರಾಗಿದ್ದು ೧೯೮೮ರಲ್ಲಿ ನಿವೃತ್ತರಾದರು.

ಹಸ್ತಪ್ರತಿಶಾಸ್ತ್ರದಲ್ಲಿ ತಜ್ಞರಾಗಿದ್ದು ದೇಶದ ವಿವಿಧೆಡೆಗಳಲ್ಲಿ ದೊರೆಯುವ ಹಸ್ತಪ್ರತಿಗಳ ಪರಿಶೀಲನೆ ಮಾಡಿ ಅನೇಕ ಅಪರೂಪದ ಕೃತಿಗಳನ್ನು ಹೊರ ತಂದಿದ್ದಾರೆ. ವಿವಿಧೆಡೆಗಳಲ್ಲಿ ನಡೆದ ಹಸ್ತಪ್ರತಿಶಾಸ್ತ್ರ ಸಮ್ಮೇಳನಗಳ ಸರ್ವಾಧ್ಯಕ್ಷರಾಗಿ ಗೌರವ ಪಡೆದಿದ್ದಾರೆ. ಅಖಿಲ ಕರ್ನಾಟಕ ಕನ್ನಡ ಸಾಹಿತ್ಯ ಸಮ್ಮೇಳನಗಳ ಗೋಷ್ಠಿಗಳಲ್ಲಿ ಪ್ರಬಂಧ ಮಂಡಿಸಿದ್ದಾರೆ. ಸುಮಾರು ೭೦ಕ್ಕೂ ಹೆಚ್ಚು ಕೃತಿಗಳ ಸಂಪಾದಕರಾಗಿ ಅನುವಾದಕರಾಗಿ, ರಚನಕಾರರಾಗಿ ಕೆಲಸ ಮಾಡಿರುವ ಇವರ ನೇಮಿಚಂದ್ರನ ನೇಮಿನಾಥ ಪುರಾಣ, ರನ್ನನ ಸಾಹಸಭೀಮವಿಜಯ ಮತ್ತು ಅಜಿತನಾಥಪುರಾಣ, ಲಕ್ಷ್ಮೀಶನ ಜೈಮಿನಿ ಭಾರತಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನಗಳೂ ನಾಗವರ್ಮನ ವರ್ಧಮಾನ ಪುರಾಣಕ್ಕೆ ರಾಜ್ಯ ಸಾಹಿತ್ಯ ಅಕಾಡಮಿ, ತೀನಂಶ್ರೀ ಮತ್ತು ದೇವರಾಜ ಬಹದ್ದೂರ್ ಬಹುಮಾನಗಳೂ, ಜೈಮಿನಿ ಭಾರತಕ್ಕೆ ತೀನಂಶ್ರೀ ಬಹುಮಾನವೂ, ಶಾಂತಿಕೀರ್ತಿಮುನಿಯ ಪಾರ್ಶ್ವನಾಥ ಚರಿತೆಗೆ 'ಸ್ವಸ್ತಿಶ್ರೀ ದೇವೇಂದ್ರಕೀರ್ತಿ ಪ್ರಶಸ್ತಿ'ಯೂ, ಆಯತವರ್ಮನ 'ರತ್ನಕರಂಡಕ' ಗ್ರಂಥಕ್ಕೆ 'ಶ್ರೀ ಪಿ. ಶಾಂತಿಲಾಲ್ ಪ್ರಶಸ್ತಿಯೂ ಲಭಿಸಿವೆ. ಶ್ರವಣಬೆಳಗೊಳದ ೧೯೯೮ರ ಪ್ರತಿಷ್ಠಿತ 'ಗೊಮ್ಮಟೇಶ ವಿದ್ಯಾಪೀಠ ಪ್ರಶಸ್ತಿ', ಚಾಮುಂಡರಾಯ ಪ್ರಶಸ್ತಿ' ೨೦೦೫ರ ' ಶ್ರೀಯುತ ಸೇಡಿಯಾಪು ಕೃಷ್ಣಭಟ್ಟರ ಪ್ರಶಸ್ತಿ' ಮತ್ತು ದಕ್ಷಿಣ ರೋಟರಿ ಅವರು ಕೂಡ ಮಾಡುವ 'ದಕ್ಷಿಣ ಕೇಸರಿ ಕನ್ನಡ ಸಾಹಿತ್ಯ ಪ್ರಶಸ್ತಿ' ಗಳು ಇವರಿಗೆ ಸಂದಿವೆ. ಶ್ರವಣಬೆಳಗೊಳದ ರಾಷ್ಟ್ರೀಯ ಪ್ರಾಕೃತ ಅಧ್ಯಯನ ಮತ್ತು ಸಂಶೋಧನ ಸಂಸ್ಥೆಯ ಹಸ್ತಪ್ರತಿ ವಿಭಾಗದ ಮುಖ್ಯಸ್ಥರಾಗಿ ಅಪ್ರಕಟಿತ ಗ್ರಂಥಗಳ ಪರಿಷ್ಕರಣೆಯಲ್ಲಿ ನಿರತರಾಗಿದ್ದಾರೆ. ೧೯೯೮ರ 'ಶ್ರೀ ಚಾಮುಂಡರಾಯ ಪ್ರಶಸ್ತಿ' ೨೦೦೫ರ ' ಶ್ರೀಯುತ ಸೇಡಿಯಾಪು ಕೃಷ್ಣಭಟ್ಟರ ಪ್ರಶಸ್ತಿ' ಮತ್ತು ದಕ್ಷಿಣ ರೋಟರಿ ಅವರು ಕೊಡ ಮಾಡುವ 'ದಕ್ಷಿಣ ಕೇಸರಿ ಕನ್ನಡ ಸಾಹಿತ್ಯ ಪ್ರಶಸ್ತಿ' ಗಳು ಇವರಿಗೆ ಸಂದಿವೆ. ಶ್ರವಣಬೆಳಗೊಳದ ರಾಷ್ಟ್ರೀಯ ಪ್ರಾಕೃತ ಅಧ್ಯಯನ ಮತ್ತು ಸಂಶೋಧನ ಸಂಸ್ಥೆಯ ಹಸ್ತಪ್ರತಿ ವಿಭಾಗದ ಮುಖ್ಯಸ್ಥರಾಗಿ ಅಪ್ರಕಟಿತ ಗ್ರಂಥಗಳ ಪರಿಷ್ಕರಣೆಯಲ್ಲಿ ನಿರತರಾಗಿದ್ದರು. ಅವರಿಗೆ ಬಿಎಂಶ್ರೀ ಪ್ರತಿಷ್ಠಾನವು ಶ್ರದ್ಧಾಂಜಲಿ ಸಲ್ಲಿಸುತ್ತದೆ .



ಶ್ರೀ ಸಣ್ಣಯ್ಯ ಅವರಿಗೆ ಬಿಎಂಶ್ರೀಪ್ರತಿಷ್ಠಾನವು ೦೩-೦೧-೨೦೧೫ ರಂದು ಶ್ರೀ ಸಾಹಿತ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿತ್ತು

## ಡಾ. ಸಿದ್ಧಲಿಂಗಯ್ಯ
### ೦೩-೦೨-೧೯೫೪ - ೧೧-೦೬-೨೦೨೧



ಅಮಿತ ಉತ್ಸಾಹ, ಹಾಸ್ಯ ಲೇಪಿತ ಮಾತಿನ ಚಾಕಚಾಕ್ಯತೆ ಆದರೆ ಅಷ್ಟೇ ಮೊನಚಾದ ಗಂಭೀರ ವಿಷಯ ಮಂಡನೆ, ಸಮುದಾಯದ ಒಳಿತಿಗಾಗಿ ದುಡಿಯುವ ಹಂಬಲಗಳಿಂದಾಗಿ ಅತ್ಯಂತ ಕಡುಬಡತನದಿಂದ ಮೇಲೆದ್ದು ಬಂದು ಸಾಹಿತಿಯಾಗಿ, ಸಂಗಟಕನಾಗಿ, ರಾಜಕೀಯ ಧುರೀಣನಾಗಿ, ಸಮಾಜ ಪರಿವರ್ತಕನಾಗಿ ಲಕ್ಷಾಂತರ ಜನರ ಪುರೋಭಿವೃದ್ಧಿಗೆ ಶ್ರಮಿಸಿ ಕರ್ನಾಟಕ ಅಂಬೇಡ್ಕರ್ ಎಂದು ಖ್ಯಾತಿ ಪಡೆದ ದಲಿತ ಕವಿ ಶ್ರೀ ಸಿದ್ಧಲಿಂಗಯ್ಯನವರು ಕೋವಿಡ್ ಸಂಕಷ್ಟದಲ್ಲಿ ಪಾರಾಗದೆ ಎಲ್ಲರಿಂದ ದೂರವಾಗಿರುವುದು ನಾಡಿಗೆ ತುಂಬಲಾರದ ನಷ್ಟವೆಂದು ಹೇಳುವುದರಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲ. ನೊಂದ, ಶೋಷಿತ ಜನರ ದನಿಯಾಗಿ ಐದು ದಶಕಗಳ ಕಾಲ ಸಾಮಾಜಿಕ ಹೋರಾಟಗಳನ್ನು ಸಂಘಟಿಸಿ ಸದ್ದಿಲ್ಲದೆ ಕ್ರಾಂತಿಕಾರಕ ಬದಲಾವಣೆಯನ್ನು ತಂದು ರಾಷ್ಟ್ರವ್ಯಾಪಿ ಹೆಸರುಗಳಿಸಿದ್ದ ಶ್ರೀಯುತರು ಸರಳ ಪದಗಳಲ್ಲಿಯೇ ಅಪಾರವಾದ, ಶಕ್ತಿಯುತವಾದ ಅರ್ಥವನ್ನು ತುಂಬಿ ಎಲ್ಲರ ಎದೆಗೆ, ಮನಸ್ಸಿಗೆ ನಾಟುವ ಹಾಗೆ ಪದ್ಯಗಳನ್ನು ಬರೆದು, ಹತ್ತಕ್ಕೂ ಹೆಚ್ಚು ಕೃತಿಗಳನ್ನು ಬರೆದು ಮಹತ್ವದ ಸಾಹಿತಿಯಾಗಿದ್ದರು. ನಾಡಿನ ಹಲವಾರು ಪ್ರಶಸ್ತಿಗಳನ್ನು ತಮ್ಮ ಪಾಲಿಗೆ ಪಡೆದಿದ್ದರು. ವಿಧಾನ ಪರಿಷತ್ತಿನ ಸದಸ್ಯರಾಗಿ ಎರಡು ಅವಧಿಗಳಲ್ಲಿ ಅವರು ಮಾಡಿದ ಭಾಷಣಗಳು ಸಂಪುಟಗಳಲ್ಲಿ ನಾಡಿನ ಏಳು ಬೀಳಿನ, ಸಾಧನೆಗಳ ದಾಖಲೆಯಿದೆ. ದಲಿತ ಸಂಘರ್ಷ ಸಮಿತಿಯ ಆರಂಭಿಕ ಸಂಘಟಕರಾಗಿ ಹಿಂದುಳಿದ ಜನರಲ್ಲಿ ಹೊಸ ಚೈತನ್ಯವನ್ನು ತುಂಬಿದರು. ಸರ್ವಸಮಾನತೆಯ ಕೂಗನ್ನು ಕೃತಿಯಲ್ಲಿ ತಂದರು. ಅವಕಾಶ ವಂಚಿತರಿಗೆ ಅವಕಾಶವನ್ನು ಒದಗಿಸಿಕೊಟ್ಟರು. ಯಾವುದೇ ಸಮಾರಂಭದಲ್ಲಿ ಅವರು ಭಾಷಣ ಮಾಡಿದರೂ ಸಭಿಕರನ್ನು ಅವರು ನಗೆಯಲ್ಲಿ ತೇಲಿಸದೇ ಇರುತ್ತಿರಲಿಲ್ಲ. ತಿಳಿಮಂದಹಾಸದ ಸಿದ್ಧಲಿಂಗಯ್ಯನವರು ಎಲ್ಲರ ಮನದಲ್ಲಿ ಶಾಶ್ವತವಾಗಿ ನೆಲೆಸಿರುತ್ತಾರೆ. ಬಾಲ್ಯದಲ್ಲಿ ಅವರು ಸಮಾಧಿಗಳ ಮೇಲೆ ಕುಳಿತು ಪುಸ್ತಕ ಓದಿದ್ದನ್ನು ಯಾವಾಗಲೂ ನೆನಪಿಸುತ್ತಲೇ ಇದ್ದರು. ಈಗ ಅವರೇ ಸಮಾಧಿಗ್ರಸ್ಥರಾದದ್ದು ವಿಪರ್ಯಾಸವೇ ಸರಿ. ಅವರಿಗೆ ಬಿಎಂಶ್ರೀ ಪ್ರತಿಷ್ಠಾನವು ಶ್ರದ್ಧಾಂಜಲಿ ಸಲ್ಲಿಸುತ್ತದೆ.



ಡಾ. ಸಿದ್ದಲಿಂಗಯ್ಯ ಅವರಿಗೆ ಬಿಎಂಶ್ರೀ ಪ್ರತಿಷ್ಠಾನವು ೦೩-೦೧-೨೦೧೬ ರಂದು ಶ್ರೀ ಸಾಹಿತ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿತ್ತು.

## ಡಾ.ಕೋ.ವೆಂ.ರಾಮಕೃಷ್ಣೇಗೌಡ

**ಜನನ-೧೦-೬-೧೯೬೨ - ನಿಧನ ೩-೫-೨೦೨೧**



ಕನ್ನಡ ಸಹ ಪ್ರಾಧ್ಯಾಪಕ, ಕವಿ,ಗಾಯಕ,ಸಂಘಟಕ,ಕನ್ನಡ ಪರ ಚಿಂತಕ,ಅಂಕಣಕಾರ, ಪತ್ರಿಕಾ ಸಂಪಾದಕರಾಗಿ ನಿರಂತರವಾಗಿ ಕ್ರಿಯಾಶೀಲತೆಯನ್ನು ಮೈಗೂಡಿಸಿಕೊಂಡವರು. ಮೂರು ಕವನ ಸಂಕಲನಗಳು, ಮೂರು ವಿಮರ್ಶಾ ಸಂಕಲನಗಳು, ಅಂಕಣ ಸಾಹಿತ್ಯ/ನಾಡು ನುಡಿ,ಸಂಸ್ಕೃತಿ ಕುರಿತು ಎಂಟು ಕೃತಿಗಳು, ಒಂದು ಸಂಶೋಧನಾ ಗ್ರಂಥ, ಐದು ವ್ಯಕ್ತಿಚಿತ್ರಗಳು ಹೀಗೆ ಒಟ್ಟು ಇಪ್ಪತ್ತು ಕೃತಿಗಳನ್ನು ರಚನೆ ಮಾಡಿದ್ದಾರೆ. ಕನ್ನಡ ಸಂಘರ್ಷ ಸಮಿತಿಯ ಅಧ್ಯಕ್ಷರಾಗಿ, ಬೆಂಗಳೂರು ವಿಶ್ವವಿದ್ಯಾಲಯದ ಕಾಲೇಜು ಕನ್ನಡ ಅಧ್ಯಾಪಕರ ಕ್ಷೇಮಾಭಿವೃದ್ಧಿ ಒಕ್ಕೂಟದ ಅಧ್ಯಕ್ಷರಾಗಿ ಹಾಗೂ ಇವರು ಬೆಂಗಳೂರು ನಗರ ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾಗಿ, ಕಾರ್ಯದರ್ಶಿಯಾಗಿ ಹಲವಾರು ಸಂಘಟನೆಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದವರು.

೨೦೧೭-೨೦೨೦ ಅವಧಿಯಲ್ಲಿ ಮೂರು ವರ್ಷ ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದುಕೊಂಡು ಅದರ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು.

ಇವರ ಬೋ ಕನ್ನಡ ಸಾಹಿತ್ಯ, ಸಂಘ ಸಂಸ್ಥೆಗಳ ಒಡನಾಟ, ಹೋರಾಟವೇ ಮೊದಲಾದವುಗಳಿಗೆ ಬಳುವಳಿಯಾಗಿ ೨೦೧೪ ರಲ್ಲಿ ನಾಡಪ್ರಭು ಕೆಂಪೇಗೌಡ ಪ್ರಶಸ್ತಿ,ಕನ್ನಡ ಭೂಷಣ ಪ್ರಶಸ್ತಿ,ಅತ್ತಿಮಬ್ಬೆ ಪ್ರಶಸ್ತಿಯೇ ಮೊದಲಾದ ೨೨ ಪ್ರಶಸ್ತಿಗಳನ್ನು ಪಡೆದಿದ್ದಾರೆ.

ಎದೆಯ ಪದ, ಕುಗ್ಗಿ ನಿಲ್ಲದಿರು ಕುಬ್ಜನಾಗದಿರೊ,ಕವನ ನಮನ ಕವನ ಸಂಕಲನಗಳು. ಕೃತಿಯಾಳ, ದುಂಬಿ ಕಾಯಕ, ಶೂದ್ರ ತಪಸ್ವಿ ಅನುಸಂಧಾನ ವಿಮರ್ಶಾ ಕೃತಿಗಳು, ಅಂಕಣ ಸಾಹಿತ್ಯ, ಸಂಶೋಧನೆ, ವ್ಯಕ್ತಿ ಚಿತ್ರಗಳನ್ನು ಕುರಿತು ಕೃತಿಗಳನ್ನು ರಚಿಸಿದ್ದಾರೆ.

ಹೀಗೆ ಹಲವು ಸಾಧನೆಗಳನ್ನು ಮಾಡಿರುವ ಶ್ರೀಯುತರು ನಮ್ಮನ್ನು ಅಗಲಿದ್ದಾರೆ. ಇವರ ಆತ್ಮಕ್ಕೆ ಶ್ರದ್ಧಾಂಜಲಿಯನ್ನು ಬಿಎಂಶ್ರೀ ಪ್ರತಿಷ್ಠಾನ ಅರ್ಪಿಸುತ್ತದೆ.

## ಜರಗನಹಳ್ಳಿ ಶಿವಶಂಕರ್

**೦೮-೦೯-೧೯೪೯ -೦೫-೦೫-೨೦೨೧**



ಪ್ರಖ್ಯಾತ ಕವಿ ಜರಗನಹಳ್ಳಿ ಶಿವಶಂಕರ್‌ರವರು ಕೋವಿಡ್ ದಾಳಿಗೆ ಸಿಲುಕಿ ಕಣ್ಮರೆಯಾಗಿರುವುದು ಚುಟುಕು ಸಾಹಿತ್ಯ ಕ್ಷೇತ್ರಕ್ಕೆ ತುಂಬಲಾರದ ನಷ್ಟವಾಗಿದೆ. ನಾಡಿನ ನೂರಾರು ಯುವ ಕವಿಗಳಿಗೆ, ಸಾಹಿತಿಗಳಿಗೆ ಬೆಂಬಲ ನೀಡುತ್ತ ಅನೇಕ ಭರವಸೆಯುಕ್ತ ಬರಹಗಾರರನ್ನು ಬೆಳೆಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಗೌ। ಕಾರ್ಯದರ್ಶಿಯಾಗಿ ನಾಡಿನಾದ್ಯಂತ ಸಂಚರಿಸಿ ಕನ್ನಡದ ಕಾರ್ಯಕ್ರಮಗಳನ್ನು ಏರ್ಪಡಿಸಿ ಸಾಹಿತ್ಯದ ಬೆಳವಣಿಗೆಗೆ ತಮ್ಮದೇ ಆದ ವಿಶಿಷ್ಟ ಕಾಣಿಕೆಯನ್ನು ನೀಡಿದ್ದಾರೆ. ಜರಗನಹಳ್ಳಿ ವೀರಶೈವ ಸಮಾಜದ ಅಧ್ಯಕ್ಷರಾಗಿ ೨೫ಕ್ಕೂ ಹೆಚ್ಚು ಮಾಸಿಕ 'ಬೆಳದಿಂಗಳ ಕೂಟ' ಕಾರ್ಯಕ್ರಮಗಳನ್ನು ಆಯೋಜಿಸಿ ಸಮಾಜದ ಎಲ್ಲಾ ಕ್ಷೇತ್ರಗಳ ಸಾಧಕ/ಸಾಧಕಿಯರನ್ನು ಆಹ್ವಾನಿಸಿ, ಉಪನ್ಯಾಸಗಳನ್ನು ಏರ್ಪಡಿಸಿ ಸನ್ಮಾನಿಸಿ ಗೌರವಿಸಿದ್ದಾರೆ.

ವಿಶೇಷವಾಗಿ ಮಳೆ ಹಾಗೂ ಜಲದ ಬಗ್ಗೆ ಅರ್ಥಪೂರ್ಣ ತುಂತುರು ಹನಿಗಳ ರೂಪದಲ್ಲಿ, ಚುಟುಕಗಳಲ್ಲಿ ಅಪಾರವಾದ ಆಧ್ಯಾತ್ಮಿಕ ಅರ್ಥವನ್ನು ತುಂಬಿ ೨೫ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ. ರಾಜ್ಯೋತ್ಸವ ಪ್ರಶಸ್ತಿ ಸೇರಿದಂತೆ ಅನೇಕ ಪ್ರಶಸ್ತಿಗಳು ಇವರಿಗೆ ಸಂದಿವೆ.

ತಮ್ಮ ೭೫ನೇ ವಯಸ್ಸಿನಲ್ಲಿ ಅಕಾಲಿಕ ಸಾವನ್ನಪ್ಪಿದ ಇವರ ಆತ್ಮಕ್ಕೆ ದೇವರು ಚಿರಶಾಂತಿಯನ್ನು ದಯಪಾಲಿಸಿ ಎಂದು ಪ್ರಾರ್ಥಿಸೋಣ, ತಮ್ಮ ಕೊನೆಯ ದಿನಗಳಲ್ಲಿ ಬರೆದ ಕವಿತೆಯ ಸಾಲು ಹೀಗಿದೆ; ಮನಸ್ಸು ಸ್ವರ್ಗವನ್ನು ಕಾಣಬೇಕೆಂದು ಅನಂತ ಆಕಾಶದಲ್ಲಿ ಅಲೆದಾಡುತ್ತೆ! ದಣಿದು ದಣಿದು ನಿದ್ದೆಗೆ ಜಾರಿ ಕಣ್ಮರೆ-ಯಾಗಿ ಮಲಗಿಬಿಡುತ್ತೇ!

ಅವರಿಗೆ ಬಿಎಂಶ್ರೀ ಪ್ರತಿಷ್ಠಾನವು ಶ್ರದ್ಧಾಂಜಲಿ ಸಲ್ಲಿಸುತ್ತದೆ

## ಹೆಚ್. ಎಸ್. ದೊರೆಸ್ವಾಮಿ

**೧೦-೪-೧೯೧೮- ೨೫-೦೫-೨೦೨೧**



೧೯೪೨ ರಲ್ಲಿ ಪದವಿ ಮುಗಿಸಿದ ನಂತರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ ಸುಮಾರು ಒಂದೂವರೆ ವರ್ಷ ಸೆರೆಮನೆಯಲ್ಲಿದ್ದರು. ನಂತರ ಅವರು ಕೆಲಕಾಲ ಪತ್ರಿಕೆಯ ಸಂಪಾದಕರಾಗಿದ್ದರು. ಜೀವನ ಪರ್ಯಂತ ಅವರು ಚಳುವಳಿಗಳಲ್ಲಿ ಭಾಗವಹಿಸುತ್ತಿದ್ದರು. ೧೯೭೫ರಲ್ಲಿ ತುರ್ತುಪರಿಸ್ಥಿತಿಯಲ್ಲಿ ಅವರು ಜೈಲುವಾಸ ಕಂಡರು. ದೊರೆಸ್ವಾಮಿಯವರು ಮೈಸೂರು ಪತ್ರಕರ್ತರ ಸಂಘ, ಅಖಿಲ ಭಾರತ ಕಾರ್ಯನಿರತ ಪತ್ರಕತ್ರ ಸಂಘ, ಪತ್ರಕರ್ತರ ಸಹಕಾರಿ ಬ್ಯಾಂಕ್, ಭಾರತ ಸೇವಕ ಸಮಾಜ, ಭೂದಾನ ಚಳವಳಿ, ಹನುಮಂತ ನಗರ ಸಹಕಾರಿ ಬ್ಯಾಂಕ್, ಭಾರತ ಮಾತಾ ವಿದ್ಯಾ ಮಂದಿರ ಶಾಲೆ, ಶಿಕ್ಷಕರ ತರಬೇತಿ ಕಾಲೇಜು, ಮದ್ಯಪಾನ ನಿಷೇಧ, ಕೈಗಾ ಅಣುಸ್ಥಾವರ ವಿರೋಧಿ ಚಳವಳಿ, ಹರಿಹರ ಪಾಲಿಫೈಬರ್ಸ್ ವಿರುದ್ಧದ ಹೋರಾಟ, ನೈಸ್, ಕಾರ್ಗಿಲ್‌ನಂತಹ ಕಂಪನಿಗಳ ವಿರುದ್ಧದ ಹೋರಾಟಗಳು, ಮಂಡೂರು ಹೋರಾಟ, ಭೂಗಳ್ಳರ ಭೂ ಕಬಳಿಕೆ ವಿರೋಧಿ ಹೋರಾಟ, ಭ್ರಷ್ಟಾಚಾರ ವಿರೋಧಿ ಚಳವಳಿ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಜನವಿರೋಧಿ ನೀತಿಗಳ ವಿರೋಧಿ ಹೋರಾಟಗಳು, ಕಾವೇರಿ ಚಳವಳಿ, ಭೂಮಿ ಮತ್ತು ವಸತಿ ವಂಚಿತರ ಹೋರಾಟ.

ಹೀಗೆ ಒಂದಿಲ್ಲೊಂದು ರಚನಾತ್ಮಕ ಚಟುವಟಿಕೆ/ಚಳವಳಿ/ಹೋರಾಟಗಳಲ್ಲಿ ಅವಿಶ್ರಾಂತವಾಗಿ ಕೊನೆಯವರೆಗೂ ತಮ್ಮನ್ನು ತೊಡಗಿಸಿಕೊಂಡೇ ಬಂದಿದ್ದರು.

ಅವರಿಗೆ ಬಿಎಂಶ್ರೀ ಪ್ರತಿಷ್ಠಾನವು ಶ್ರದ್ಧಾಂಜಲಿ ಸಲ್ಲಿಸುತ್ತದೆ.




# ಪತ್ರಿಕಾ ನೆನಪು





18/6/2021 ಪ್ರ.ವಾ.

ಪ್ರೇಮಾಭಟ್‌ಗೆ 'ಗಣ್ಯಲೇಖಕಿ' ಗೌರವ

ಪ್ರೇಮಾಭಟ್ ಚಿದಾನಂದ ಸಾಲಿ

ಪ್ರ.ವಾ 18/6/2021


ಸಂಕ್ಷಿಪ್ತ ಸುದ್ದಿ

ಹಳಗನ್ನಡ–ಶಾಸನ ತರಗತಿ ಆರಂಭ

ಬೆಂಗಳೂರು: ಬಿಎಂಶ್ರೀ ಪ್ರತಿಷ್ಠಾನವು ಜುಲೈ 22ರಿಂದ ಹಳಗನ್ನಡ ಹಾಗೂ ಶಾಸನ ತರಗತಿಗಳನ್ನು ಆನ್‌ಲೈನ್ ಮೂಲಕ ಆರಂಭಿಸಲಿದೆ.

ಆಸಕ್ತರು ದೂರವಾಣಿ ಸಂಖ್ಯೆ 080-26615877 ಅಥವಾ ಇ-ಮೇಲ್ bmsritrust@gmail.com ಮೂಲಕ ಜುಲೈ 15ರೊಳಗೆ ಹೆಸರು ನೋಂದಾಯಿಸಿಕೊಳ್ಳುವಂತೆ ಪ್ರಕಟಣೆ ತಿಳಿಸಿದೆ.

ಪ್ರ.ವಾ



## ಎಂ.ವಿ.ಸೀ. ಬದುಕು ಬರಹ – ೧೬

– ಡಾ. ಪಿ.ವಿ. ನಾರಾಯಣ

ಹಿಂದಿನ ಸಂಚಿಕೆಯಿಂದ

ಸಾಮಾಜಿಕ ಅಸಮಾನತೆಗೆ ಕಾರಣವಾದ ಮತ್ತೊಂದು ಪ್ರಮುಖ ಅಂಶವೆಂದರೆ ಜಾತೀಯತೆ. ನಮ್ಮ ದೇಶದಲ್ಲಿ ವ್ಯಕ್ತಿಯ ಇಡೀ ಭವಿತವ್ಯವನ್ನು ನಿರ್ಧರಿಸುವುದು ಅವನ ಯೋಗ್ಯತೆ–ಗಿಂತ ಮಿಗಿಲಾಗಿ ಅವನ ಹುಟ್ಟು, ಅವನ ಜಾತಿ. ಅದರಲ್ಲಿಯೂ ಅಮಾನವೀಯವಾದ ಅಸ್ಪೃಶ್ಯತೆಯ ಪಿಡುಗು. ಈಗ ಇದರ ವ್ಯಾಪಕತೆ ಕಟಡಿಮೆಯಾಗಿರಬಹುದಾದರೂ ಇನ್ನೂ ಬುಸುಗುಡುತ್ತಿದೆ ಈ ಹಾವು. ೧೯೪೭ ರಲ್ಲಿ ಪ್ರಕಟವಾದ 'ಅಶೋಕ ಚಕ್ರ' ಸಂಕಲನದಲ್ಲಿ ಸೇರಿರುವ 'ಅಸ್ಪೃಶ್ಯನಾರು?' ಎಂಬ ಸಾನೆಟ್ "ಸಲ್ಲದಿಲ್ಲದ ಸತ್ತ ಶಾಸ್ತ್ರದಾಧಾರವನು ಕೊಟ್ಟು" ಕೆಲವರನ್ನು ಶತಮಾನಗಳಿಂದ ಅಸ್ಪೃಶ್ಯರೆಂದು ದೂರವಿರಿಸಿದ "ಪಾಪ ಫಲವೆ ನಮ್ಮ ಇಂದಿನ ದಾಸ್ಯ" ಎಂದು ಕವಿ ಮುನಿಯುತ್ತಾರೆ.

ಹಾಗೆ ನೋಡಿದರೆ ದೇವನಿದಿರಲ್ಲಿ ಎಲ್ಲರೂ ಅಸ್ಪೃಶ್ಯರೇ ಎಂದು ಹೇಳುವುದರ ಮೂಲಕ ಇನ್ನೊಂದು ಬಗೆಯ ಸಮಾನತೆಯನ್ನು ಎತ್ತಿ ತೋರಿಸುತ್ತಾರೆ.

ಬಹು ಹಿಂದೆಯೇ ವರ್ಣ–ಜಾತಿಗಳ ವಿರುದ್ಧ ಜೈನ–ಬೌದ್ಧಗಳು ಸಿಡಿದೆದ್ದರೂ ಮತ್ತೆ ಅದರ ನೆರಳಲ್ಲಿಯೇ ನಮ್ಮ ಸಮಾಜ ಸಿಕ್ಕು ಹಳೆಯ ರೋಗವನ್ನು ಅಂಟಿಸಿಕೊಂಡಿತು. ಆದರೆ ಹನ್ನೆಡರನೆಯ ಶತಮಾನದಲ್ಲಿ ಕನ್ನಡ ನಾಡಿನಲ್ಲಿ ನಡೆದ ವಚನ ಚಳವಳಿ ಇದನ್ನೆಲ್ಲ ಸಂಪೂರ್ಣವಾಗಿ ಧಿಕ್ಕರಿಸಿ ಸಮಾನತೆಯ ಹೊಸ ಪಾಂಚಜನ್ಯವನ್ನು ಮೊಳಗಿಸಿತು.

ಆ ಚಳವಳಿಯ ಕೇಂದ್ರಬಿಂದು ಬಸವಣ್ಣನನ್ನು ಕುರಿತ 'ಬಾರಯ್ಯ ಮತ್ತೊಮ್ಮೆ ಬಸವೇಶ್ವರ' ಎಂಬ ಮೂವತ್ತಾರು ಸಾಲುಗಳ ಕವನವು ಬಸವಣ್ಣನ ವಿಶೇಷಗಳನ್ನು ಹೆಸರಿಸುತ್ತ ಆತನನ್ನು ಕರ್ಮಸಿದ್ಧಾಂತದ ಬದಲು ಕಾಯಕಸಿದ್ಧಾಂತವನ್ನು ಕೊಟ್ಟವನೆಂದೂ,

ಮೇಲುಕೀಳುಗಳೆಂಬ ಭೇದಗಳ ಬದಿಗೊತ್ತಿ
ಸರ್ವಸಮತಾ ಸೌಧವನ್ನು ಸಮಕಟ್ಟಿ
ಹೊಸಯುಗದ ಹೆಬ್ಬಾಗಿಲು ತೆರೆದು, ಶಿವಮಾರ್ಗ
ಶೀಲ ಸಂಪದವೆಂದು ಸಾರಿದವನೇ

ಎಂದು ಬಣ್ಣಿಸುತ್ತದೆ. ಹೀಗೆ ಎಂವಿಸೀ ಕೆಲವು ಕಡೆಗಳಲ್ಲಾದರೂ ಜಾತೀಯತೆಯ ವಿರುದ್ಧ ದನಿಯೆತ್ತಿದ್ದಾರೆ.

(ಮುಂದುವರೆಯುವುದು)

### ಶ್ರದ್ಧಾಂಜಲಿ

**ಕನ್ನಡದ ಚೇತನಗಳಾದ ಪ್ರೊ. ವಸಂತ ಕುಷ್ಟಗಿ, ಸಂಚಾರಿ ವಿಜಯ್, ಡಾ. ಮುತ್ತುರಾಜ್ ಮತ್ತು ಡಾ. ಎಚ್.ಎಂ. ಮಹೇಶ್ವರಯ್ಯ ಇವರುಗಳ ಅಕಾಲಿಕ ನಿಧನಕ್ಕೆ ಪ್ರತಿಷ್ಠಾನವು ಕಂಬನಿ ಮಿಡಿಯುತ್ತದೆ.**



# ಪದಚರಿತೆ

ಒಂದಷ್ಟು ಪದಗಳ
ಮೂಲಚೂಲಗಳ ಹುಡುಕಾಟ



– ಡಾ. ಪಿ.ವಿ. ನಾರಾಯಣ

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2021-2023
dt. 28-12-2020
Office of Posting: Bangalore PSO, Bangalore 560026
Price : Annual Subscription Rs. 20/-
Date of publishing and Posting : 30-6-2021

ಭೋಗ೨: ಭೋಗ ಎಂಬ ಶಬ್ದಕ್ಕೆ ಹಾವು ಹಾಗೂ ಹೆಡೆ ಎಂಬರ್ಥಗಳೂ ಇವೆ. "ಭೋಗಂ ನಾಗನ ಶರೀರಮುಂ ತತ್ಫಣಮುಂ" ಎಂಬುದು 'ಅಭಿಧಾನ ವಸ್ತುಕೋಶ'ದ ವಿವರಣೆ. "ಶ್ರೀಮನ್ನಾಗೇಂದ್ರಭೋಗ ಸ್ಫುರದರುಣಮಣಿದ್ಯೋತಿ ಸಂಧ್ಯಾನಿಬದ್ಧಪ್ರೇಮಂ" ಎಂಬುದು 'ಕರ್ಣಾಟಕ ಕಾದಂಬರಿಯ' ಮಾತು. 'ಭೋಗ' (ಹೆಡೆ)ವನ್ನುಳ್ಳದ್ದು 'ಭೋಗಿ': "ಉರಗಂ ಭೋಗಿ" ('ಅಭಿಧಾನ ವಸ್ತುಕೋಶ'). "ತತ್ ಭೋಗಿ ಫಣಾದ್ಯುತಿಯೆ ಕಟ್ಟಿಲೆಯಂ ತಲೆದೋಱಲೀಯದು" – 'ಪಂಪಭಾರತ'). 'ಭೋಗಿನಿ' ಎಂದರೆ ಹೆಣ್ಣು ಹಾವು "ಪೆಡೆಯುಡುಗಿದ ಭೋಗಿನಿಯೆಮೆ ಮಿಡುಕಂ ಸಂಗಳಿಸಿದಮರಿ" (ಅಗ್ಗಳನ 'ಚಂದ್ರಪ್ರಭಪುರಾಣ'). ಈ ಶಬ್ದಕ್ಕೆ ರಾಜನ ಭೋಗದ ಹೆಣ್ಣು ಎಂಬರ್ಥವನ್ನೂ 'ಅಮರಕೋಶ' ನೀಡುತ್ತದೆ: "ಭೋಗಿನ್ಯೋನ್ಯಾ ನೃಪಸ್ತ್ರಿಯಃ". ಭೋಗೀಂದ್ರ ಎಂದರೆ ನಾಗಗಳ ಒಡೆಯ ನಾಗರಾಜ: "ಇಂದ್ರನೆ ಭೋಗೀಂದ್ರನೆ ಖಚರೇಂದ್ರನೆ ದಲ್ ಭೂಪೇಂದ್ರನೆಂಬನ್ನೆಗಂ" ('ಆದಿಪುರಾಣ').

ಪಂಪನು ಹಾವಿನ ಹೆಡೆಯನ್ನು 'ಭೋಗಿಭೋಗ' ಎಂಬ ಶಬ್ದದಿಂದಲೂ ಸೂಚಿಸುತ್ತಾನೆ: "ಸಂಸ್ಕೃತಿಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್". 'ಭೋಗರತ್ನ' ಎಂಬುದು ಹಾವಿನ ಹೆಡೆಯಲ್ಲಿರುತ್ತದೆಂದು ನಂಬಲಾಗಿದ್ದ ಮಣಿ: "ಮಿಕ್ಕಂ ವಿಷವಹ್ನಿಯಿಂ ವಿಳಯಕಾಲಜ್ವಾಲೆಯಂ ಭೋಗರತ್ನದ ಚೆಲ್ವಿಂ ದ್ಯುತಿಮಾಲೆಯಂ ಮಸಕದಂಭೋಳಿಯಿಂ ಕಾಳಿಯಂ" ಎಂಬುದು ರುದ್ರಭಟ್ಟನ 'ಜಗನ್ನಾಥವಿಜಯ'ದ ಪ್ರಯೋಗ. 'ಭೋಗವತಿ' ಎಂಬುದು ನಾಗಲೋಕದ ರಾಜಧಾನಿ ಹಾಗೂ ಅಲ್ಲಿನ ಹೊಳೆಯ ಹೆಸರುಗಳು: "ನದೀನಗರ್ಯೋರ್ನಾಗಾನಾಂ ಭೋಗವತ್ಯಥ ಸಂಗರೇ" ('ಅಮರಕೋಶ').

ಭೋಗತಲ್ಪ ವಿಷ್ಣು ಮಲಗಿರುನೆಂದು ನಂಬಲಾದ ಹಾವಿನ ಹಾಸುಗೆಯನ್ನು ಸೂಚಿಸುತ್ತದೆ: "ಭೋಗತಲ್ಪದ ಹರಿಯೊಲಿಹ ಶತಯಾಗಸುತನನು" ಎಂಬುದು ಕುಮಾರವ್ಯಾಸನ ಮಾತು. ಭೋಗಿಶಯನ ಎಂದರೆ ವಿಷ್ಣು "ಭೋಗಿಶಯನ ಶ್ರೀ ಪುರಂದರವಿಠಲನ" ಎಂಬುದು ಪುರಂದರದಾಸರ ವರ್ಣನೆ. ಹಾವುಗಳನ್ನೇ ತನ್ನ ಕಟಕ (ಕಂಕಣ) ಗಳನ್ನಾಗಿ ಮಾಡಿಕೊಂಡಿರುವವನು ಭೋಗಿಕಟಕ, ಶಿವ: "ಭೋಗಿಕಟಕನ ಗಾಣಪತ್ಯಕೆ ಹೋಗನೇ ತಂತ್ರಂ ಬೆರಸಿ" ಎಂಬ ಮಾತು ಬಸವಪುರಾಣ'ದಲ್ಲಿ ಬಂದಿದೆ. 'ಭೋಗಿವಿಭೂಷ' ಎಂದರೆ ಹಾವಿನ ಆಭರಣ; ಅದನ್ನು ಧರಿಸಿದವನೇ ಶಿವ: "ಅಪರ್ಣೆಯ ವಕ್ತ್ರಮನೊರ್ಮೆ ನೇಹದುತ್ಸವದೊಳೆ ನೋಡುತುಂ .. .. ಭೋಗಿವಿಭೂಷನೊಪ್ಪಿದಂ" (ಷಡಕ್ಷರದೇವನ 'ಶಬರಶಂಕರವಿಲಾಸ').

=====

ಮಂತ್ರ೧: ತುಂಬ ವ್ಯಾಪಕವಾದ ಬಳಕೆಯ ಸಂಸ್ಕೃತ ಶಬ್ದವಿದು. "ವೇದಭೇದೇ ಗುಪ್ತವಾದೌ ಮಂತ್ರಃ" ಎಂದು 'ಅಮರಕೋಶ'ದಲ್ಲಿ ಹೇಳಿದೆ. ಇದರ ಪ್ರಕಾರ 'ಮಂತ್ರ' ಎಂದರೆ ವೇದದ ಭಾಗ, ರಹಸ್ಯವಾಗಿ ಹೇಳುವುದು ಎಂದರ್ಥ. ಇದಕ್ಕೆ ಬ್ರಾಹ್ಮಣವನ್ನುಳಿದು ಸಂಹಿತೆಯು ಸೇರಿದ ವೇದ ಎಂಬ ವಿವರಣೆಯೂ ಇದೆ. ಹಾಗೆಯೇ ದೇವತೆಗಳನ್ನು ಒಲಿಸಿಕೊಳ್ಳಲು ಹೇಳುವ ಮಾತು ಎಂಬರ್ಥವೂ ಇದೆ: ಅಸ್ತ್ರಗಳ "ಪ್ರಯೋಗಸಂಹಾರವಿಭಕ್ತಮಂತ್ರಂ"ದ ಉಲ್ಲೇಖ ಕಾಳಿದಾಸನ 'ರಘುವಂಶ'ದಲ್ಲಿದೆ. "ಮಗಳೆ ಬಾ ಕೊಳ್ ಐದು ಮಂತ್ರಾಳಿಗಳಂ" ಎಂಬುದು 'ಕುಮಾರವ್ಯಾಸಭಾರತ'ದ ಮಾತು. ಧಾರ್ಮಿಕ ಆಚರಣೆಗಳಲ್ಲಿ ಮಂತ್ರ–ತಂತ್ರ ಎಂಬೆರಡು ಭಾಗಗಳಲ್ಲಿ 'ಮಂತ್ರ' ಎಂದರೆ ಹೇಳುವ ಅಕ್ಷರಸಮೂಹ ಎಂಬರ್ಥ ಪ್ರಾಪ್ತವಾಗುತ್ತದೆ. ಕಾಲಕ್ರಮದಲ್ಲಿ ಸಂಸ್ಕೃತದ ಶ್ಲೋಕಗಳನ್ನೆಲ್ಲ 'ಮಂತ್ರ' ಎಂಬ ಶಬ್ದದಿಂದ ಸೂಚಿಸುವ ಪರಿಪಾಟವುಂಟಾಯಿತು.

ಮಂತ್ರದ್ರಷ್ಟಾರನಾದ ಋಷಿಯನ್ನು 'ಮಂತ್ರಕೃತ್' ಎನ್ನುತ್ತಾರೆ. ಮಂತ್ರದ ಅಭಿಮಾನಿ ದೇವತೆಯನ್ನು ಪೊನ್ನನ 'ಶಾಂತಿಪುರಾಣ'ದಲ್ಲಿ 'ಮಂತ್ರದೇವತೆ' ಎನ್ನಲಾಗಿದೆ ("ಮನಸಿಜಮಂತ್ರದೇವತೆಯರಂಗನೆಯರ್"). ಮಂತ್ರದಿಂದ ಪಾವನಗೊಂಡವನು

**೩ನೇಪುಟಕ್ಕೆ**

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI SMARAKA PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ.........................................................................................

.........................................................................................................

.........................................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭